ಸಮಾಜ ಶಿಕ್ಷಣ ಗ್ರಂಥಮಾಲೆ ೧೫ ನೆಯ ಪುಷ್ಪ.



# ಹರಿಜನೋದ್ಧಾರ



ಬರೆದವರು

ಶ್ರೀ. ಸಿಂಪಿ ಲಿಂಗಣ್ಣನವರು, ಚಡಚಣ

೨ ನೇ ಮುದ್ರಣ.

ಪ್ರತಿಗಳು ೧೦೦೦

೧೯೬೦ ] [ ಬೆಲೆ ೨೫ ನ. ಪೈಸೆ

# ಮುನ್ನುಡಿ



ಈ ಚಿಕ್ಕ ಹೊತ್ತಿಗೆಯನ್ನು ಬರೆದವರು ಶ್ರೀ. ಸಿ. ಪಿ. ಲಿಂಗಣ್ಣವರು. ಸಮಾಜ ಶಿಕ್ಷಣ ಕಾರ್ಯದಲ್ಲಿ ದುಡಿಯುವವರಿಗೆ ಇವರ ಪರಿಚಯ ಮಾಡಿ ಕೊಡುವ ಅವಶ್ಯಕತೆಯಿಲ್ಲ. ಈ ಸಲ ಅವರು ಬರೆದ ವಿಷಯ 'ಹರಿಜನೋದ್ಧಾರ' ಹರಿಜನೋದ್ಧಾರವೇ ದೇಶೋದ್ಧಾರವೆಂಬ ಮಾತನ್ನು ಮರೆಯ ತಕ್ಕದ್ದಲ್ಲ. ಮಹಾನುಭಾವಿ ಬಸವಣ್ಣನವರು ಹರಿಜನೋದ್ಧಾರವನ್ನು ಕೈಕೊಂಡ ಸಮಾಜ ಸುಧಾರಕರಲ್ಲಿ ಅಗ್ರಗಣ್ಯರು. ಅವರು ಪ್ರತಿಪಾದಿಸಿದ ವಿಚಾರಗಳನ್ನು ಜನತೆಯು ಆಚರಣೆಯಲ್ಲಿ ತಂದಿದ್ದಾದರೆ ಮಹಾತ್ಮಾ ಗಾಂಧಿಯವರಿಗೆ ಪುನಃ ಈ ಕಾರ್ಯದಲ್ಲಿ ಧುಮುಕುವ ಪ್ರಸಂಗವೇ ಬರುತ್ತಿದ್ದಿಲ್ಲ. ಹರಿಜನರ ದುರವಸ್ಥೆಯನ್ನು ಕಂಡು ಗಾಂಧೀಜಿಯವರು ಈ ಕಾರ್ಯವನ್ನು ಕೈಕೊಳ್ಳಬೇಕಾಯಿತು. ಸರಕಾರದವರು ಅಸ್ಪೃಶ್ಯತೆಯ ನಿರ್ಮೂಲನದ ಸಲುವಾಗಿ ಈಗಾಗಲೇ ಕೆಲವು ಕ್ರಮಗಳನ್ನು ತಕ್ಕೊಂಡಿರುವರು. ಕೇವಲ ಸರಕಾರದ ಕಾಯದೆ-ಕಾನೂನಗಳಿಂದ ಈ ಸಮಸ್ಯೆಯ ಪರಿಹಾರವಾಗಲಾರದು. ಜನತೆಯು ಹಾಗೂ ಅದರ ಮುಂದಾಳುಗಳೆಂದು ಹೇಳಿಕೊಳ್ಳುವವರು ಈ ದಿಶೆಯಲ್ಲಿ ಪ್ರಯತ್ನ ಮಾಡಬೇಕು. ಕೇವಲ ಸಭೆ, ಮೆರವಣಿಗೆ, ದಿನಾಚರಣೆಯಿಂದ ಈ ಕಲಂಕವು ತೊಳೆದುಹೋಗಲಾರದು. ಸಮಾಜದ ಅಜ್ಞ ಹಾಗೂ ರೂಢಿ—ಪರಂಪರೆ ಮಹತ್ವ ಕೊಡುವ ಜನತೆಯಲ್ಲಿ ಹುಗಿದುಕೊಂಡಿರುವ ಅಸ್ಪೃಶ್ಯತೆಯ ಭಾವನೆಯು ಬೇರು ಸಹಿತ ಕಿತ್ತು ಹೋಗದ ಹೊರ್ತು ಈ ಸಮಸ್ಯೆಯು ಪರಿಹಾರವಾಗಲಾರದು. ಧರ್ಮ ಪ್ರಚಾರಕರು, ಸಮಾಜ ಸುಧಾರಕರು, ಗ್ರಾಮ ಸುಧಾರಣೆಯನ್ನು ಕೈಕೊಂಡ ಕಾರ್ಯಕರ್ತರು ಮುಂತಾದವರು ಹಿಂದೂ ಧರ್ಮಕ್ಕೆ ಹತ್ತಿದ ಈ ಮಹಾ ರೋಗವನ್ನು ನಿವಾರಿಸಲು ಅಂತಃಕರಣದಿಂದ ಪ್ರಯತ್ನ ಮಾಡಬೇಕು. ಈ ಚಿಕ್ಕ ಹೊತ್ತಿಗೆಯು ಈ ಕೆಲಸದಲ್ಲಿ ದುಡಿಯುವವರಿಗೆ ಸಹಾಯಕಾರಿಯಾಗಿದೆಯೆಂದು ನಮ್ಮ ತಿಳುವಳಿಕೆ.

ಬೆಳಗಾವಿ
೩೪—೩—೫೪

ಆರ್. ಕೆ. ನೊಣಶಿ,
ಸಮಾಜ ಶಿಕ್ಷಣಾಧಿಕಾರಿಗಳು, ಬೆಳಗಾವಿ

ಓಂ ! ಭಗವತೀ !!

# ಹರಿಜನೋದ್ಧಾರ

ಹರಿಜನರೆಂದರೆ ಹೊಲೆಯ, ಮಾದಿಗ, ಘೋರ, ಸಮಗಾರ ಮೊದಲಾದವರು. ಅವರನ್ನು ಊರೊಳಗಿನ ಜನರು ಮುಟ್ಟಿಸಿಕೊಳ್ಳುತ್ತಿದ್ದಿಲ್ಲ. ಆದ್ದರಿಂದ ಅವರಿಗೆ ಅಸ್ಪೃಶ್ಯರೆನ್ನುತ್ತಿದ್ದರು. ಇತರ ಸಮಾಜದವರಿಂದ ಅವರು ದೂರ ಉಳಿದದ್ದರಿಂದ ಅವರಿಗೆ ದಲಿತರೆಂದೂ, ಅಂತ್ಯಜರೆಂದೂ ಕರೆಯುತ್ತಿದ್ದರು. ಆದರೂ ಅವರು ಹಿಂದುಗಳೇ. ಇತ್ತೀಚೆಗೆ ಅವರ ಹೀನ ಸ್ಥಿತಿಯನ್ನು ಕಂಡು, ಅವರನ್ನು ಉತ್ತಮ ಸ್ಥಿತಿಗೆ ತರಬೇಕೆಂದು ಪ್ರಯತ್ನಿಸಿದ ಮ. ಗಾಂಧಿ ಅವರು ಅವರಿಗೆ ಹರಿಜನರೆಂದು ಹೆಸರಿಟ್ಟರು. ಊರೊಳಗಿನವರೆಲ್ಲರೂ ಅವರನ್ನು ಕಡೆಗಣಿಸುತ್ತಿರುವಾಗ ಅವರಿಗೆ ಹರಿಯೇ (ದೇವರೇ) ಗತಿಯಾಗಿದ್ದುದರಿಂದ ಅವರು ಹರಿಜನರೆಂದು ಹೇಳಲಾಯಿತು. ಅವರ ಬಡತನ, ಹೊಲಸುತನ, ತಿಳಿಗೇಡಿತನ, ಮೊದಲಾದವುಗಳನ್ನು ಕಳೆಯುವ ಎತ್ನಗಡೆ ನಡೆಯಿತು. ಅದಕ್ಕೆ ಹರಿಜನ ಉದ್ಧಾರವೆಂದು ಹೇಳಲಾಗುತ್ತಿದೆ.

ತೀರ ಹಿಂದಿನ ಕಾಲದಲ್ಲಿ ಅಂದರೆ ಎರಡು ಮೂರು ಸಾವಿರ ವರುಷಗಳ ಹಿಂದೆ, ಭಾರತೀಯರು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಎಂದು ನಾಲ್ಕು ವರ್ಣಗಳನ್ನು ಕಲ್ಪಿಸಿಕೊಂಡರು. ಸಮ ಶಾಸ್ತ್ರಭ್ಯಾಸ, ಜ್ಞಾನ ಸಂಪಾದನ ಕಾರ್ಯದಲ್ಲಿ ತೊಡಗಿದವರು ಬ ರೆನಿಸಿದರು. ಸಮಾಜದ ಸಂರಕ್ಷಣೆಯ ಸಲುವಾಗಿ ಶಸ್ತ್ರಾಸ್ತ್ರಗಳನ್ನು ಯುದ್ಧ, ರಾಜ್ಯದಾಡಳಿತ ವಹಿಸಿಕೊಂಡವರು ಕ್ಷತ್ರಿಯರೆಂದೆನಿ ವ್ಯಾಪಾರ ಉದ್ಯೋಗಗಳಲ್ಲಿ ತೊಡಗಿಕೊಂಡು ದ್ರವ್ಯ ಸಂಪಾದನೆಗೆ ನಿಂ. ವರು ವೈಶ್ಯರೆನಿಸಿಕೊಂಡರು. ಬುದ್ಧಿ ಕಡಿಮೆಯಿದ್ದವರೂ, ಯುದ್ಧ ಕಲೆಯನ್ನು ಅರಿಯದವರೂ, ದುಡ್ಡು ಗಳಿಸುವ ಯುಕ್ತಿ ಗೊತ್ತಿಲ್ಲದವರೂ ಸೇವಾ ಕಾರ್ಯಕ್ಕೆ ಯೋಗ್ಯರೆನಿಸಿ ಆಳುತನಕ್ಕೆ ನಡ-ಕಟ್ಟಿದವರು. ಶೂದ್ರರೆ

ನಿಸಿಕೊಂಡರು. ಒಂದೇ ಮನೆತನದಲ್ಲಿ ನಾಲ್ವರು ಅಣ್ಣ-ತಮ್ಮಂದಿರಿದ್ದರೆ ಅವರಲ್ಲೊಬ್ಬನು ಬ್ರಾಹ್ಮಣನೂ, ಇನ್ನೊಬ್ಬನು ಕ್ಷತ್ರಿಯನೂ, ಮತ್ತೊಬ್ಬನು ವೈಶ್ಯನೂ, ಮಗುದೊಬ್ಬನು ಶೂದ್ರನೂ ಆಗಿರಬಹುದಾಗಿತ್ತು. ಆಗ ಮುಟ್ಟಿಸಿಕೊಳ್ಳುವ ಪ್ರಶ್ನೆಯೇ ಇರುತ್ತಿದ್ದಿಲ್ಲ. ಬರುತ್ತ ಬ್ರಾಹ್ಮಣನ ಮಗನೇ ಬ್ರಾಹ್ಮಣ ಕೆಲಸವನ್ನೂ, ಕ್ಷತ್ರಿಯನ ಮಗನೇ ಕ್ಷತ್ರಿಯನ ಕೆಲಸವನ್ನೂ, ವೈಶ್ಯನ ಮಗನೇ ವ್ಯಾಪಾರೋದ್ಯೋಗಗಳನ್ನೂ ಮಾಡುತ್ತ ಬಂದಂತೆ ಶೂದ್ರನ ಮಗನೇ ಸೇವಾಕಾರ್ಯವನ್ನು ಕೈಕೊಂಡನು. ಅದು ಅವರಿಗೆ ಸುಲಭವೂ ಸಹಜವೂ ಆಯಿತು. ಈ ಪ್ರಕಾರ ಸೇವಾಕಾರ್ಯವು ಶೂದ್ರನ ಮನೆತನಕ್ಕೆ ಬಿಡಲಾರದ ಕರ್ಮವಾಯಿತು.

ಸೇವಾಕಾರ್ಯವೆಂದರೆ ಊರ ಸ್ವಚ್ಛತೆ ಕಾಯ್ದುಕೊಳ್ಳುವದು, ಕೊಳೆಯನ್ನು ದೂರ ಒಯ್ದು ಚಲ್ಲುವದು, ಮೊದಲಾದ ಆಳುತನ. ಅಂಥ ಕೆಲಸಕ್ಕೆ ತಿಳುವಳಿಕೆ ಕಡಿಮೆಯಿದ್ದರೂ ಸಾಗುತ್ತದೆ. ಅದರಿಂದ ಪ್ರಾಪ್ತಿಯು ಕಡಿಮೆ ಮೈ ಕೈ ಹೊಲಸಾಗುತ್ತದೆ. ಮೇಲು ವರ್ಣದವರು ತಿಂದು ಉಂಡ ಎಂಜಲು ಶೂದ್ರರ ಊಟಕ್ಕೆ ಆಧಾರವಾಯಿತು. ಅವರು ಉಟ್ಟು ತೊಟ್ಟ ಅರಿವೆ ಧರಿಸಬೇಕಾಯಿತು. ಕೊಳೆಯ ಕೆಲಸ ಮಾಡುವ ಕಾರಣದಿಂದ ಮೈ ಹೊಲಸಾಯಿತು, ಅರಿವೆ-ಅಂಚಡಿ ಹರಕು ಹೊಲಸಾದವು. ಮನೆಕೇರಿಗಳೂ ಕೊಳೆಯಾದವು ಹೊಲಸು ಕಳೆದು ಸ್ವಚ್ಛಮಾಡಿಕೊಳ್ಳುವದು ಬಡತನ ತಿಳಿಗೇಡಿತನಗಳಿಂದ ಅಸಾಧ್ಯವಾಯಿತು. ಹೀಗಿರುವ ಜನರನ್ನು ದೂರ ಇರಿಸಿದರು. ಅವರ ಮನೆಗಳನ್ನು ಕಡೆಗೊಗೆದರು. ರಾಡಿ ರೊಜ್ಜು ಬಳಿಯುತ್ತ, ಸತ್ತ ದನಗಳನ್ನು ಹೆತ್ತೊಯ್ಯುತ್ತ; ಎಲುವು ತೊಗಲುಗಳನ್ನು ಬಿಡಿಸುತ್ತ ಕಾಲ ಕಳೆಯುವ ಅವರು ತಮ್ಮ ಉಪಜೀವನದ ಋನ್ನು ಇದರಲ್ಲಿಯೇ ಹುಡುಕಿಕೊಳ್ಳಬೇಕಾಯಿತು. ತೊಗಲು ಹದಸುವದು, ಕಾಲುಮರೆ, ಮಿಣಿ, ಮೊಟ್ಟೆಗಳನ್ನು ಹೊಲಿಯುವದು. ಉದ್ಯೋಗವಾಯಿತು. ಮಾಂಸಾಹಾರವು ಅವರಿಗೆ ಸಹಜದ ಮಾತಾಯ. ಇಷ್ಟಾದರೂ ಅವರ ಬಡತನ ಹಿಂಗಲಿಲ್ಲ. ಅವರ ಮೈ ಮನೆ ಬಟ್ಟೆಗಳ ಕೊಳೆ ಹಿಂಗಲಿಲ್ಲ. ಅದರಿಂದ ಅವರು ಹೊಲೆಯರಾದರು. ದಲಿತರಾದರು. ಅಸ್ಪೃಶ್ಯರಾದರು ಅಂತ್ಯಜರಾದರು.

ಬುದ್ಧಿಯಿಲ್ಲದ ಬಡವರೂ, ಕಡೆಗುಳಿದ ಹೊಲಸು ಜೀವಿಗಳೂ ಆಗಿದ್ದರಿಂದ ಅವರು ಇನ್ನಾವ ಕಾರಭಾರವನ್ನೂ ಮಾಡಲಾರದವರಾದರು.

ಅವರ ಮುಖ ಅಮಂಗಲವೆನಿಸಿತು; ಅವರ ದರ್ಶನ ಅಪವಿತ್ರವೆನಿಸಿತು. ಅವರ ನೆರಳು ಸಹ ಊರಿಗೆ ಬೇಡವಾಯಿತು. ಅವರ ಮಾತು ಮೈಲಿಗೆಯಾಯಿತು. ಅವರು ಊರಲ್ಲಿ ಕಾಲಿಡುವುದೇ ಬೇಡವಾಯಿತು. ಆದಾವುದೇ ಕಾರಣದಿಂದ ಅವರು ಊರಲ್ಲಿ ಹಾಯ್ದು ಹೋಗುವ ಪ್ರಸಂಗ ಬಂದರೆ "ಅಂತ್ಯಜನು ಹೊರಟಿದ್ದಾನೆ. ಓರೆಯಾಗಿ ನಿಲ್ಲಿರಿ. ಮನೆಯಲ್ಲಿ ಹೊಕ್ಕು ಕದ ಹಾಕಿಕೊಳ್ಳಿರಿ" ಎಂದು ಕೂಗುತ್ತ ಕಾಲೊಳಗಿನ ಕಾಲುಮರೆಗಳನ್ನು ಕೈಯಲ್ಲಿ ಹಿಡಕೊಂಡು ಓಡುತ್ತ ಊರದಾಟಿ ಹೋಗಬೇಕಾಗುತ್ತಿತ್ತೆಂದು ಶ್ರೀ ವಿವೇಕಾನಂದಸ್ವಾಮಿಗಳು ಒಂದು ಕಡೆ ವರ್ಣಿಸಿದ್ದಾರೆ.

ಸಮಾಜದ ಅನುಕೂಲತೆಗಾಗಿ ಏರ್ಪಾಡು ಮಾಡಿದ ವರ್ಣ ವ್ಯವಸ್ಥೆಯ ಕಾರಣದಿಂದ ಶೂದ್ರನ ಜೀವನವು ಹಸಿಗೆಟ್ಟಿತು. ಅದು ಅತಿಯಾಗಿ ಬೆಳೆಯಿತು. ಅದನ್ನು ಕಂಡು ಕೆಲವರಿಗೆ ಕರುಣೆ ಹುಟ್ಟಿತು. ಕರುಣಾಮೂರ್ತಿಯಾದ ಗೌತಮ ಬುದ್ಧನಂತೂ ಕರಗಿ ಹೋದನು. ಅವನು ತನ್ನ ಸುಧಾರಕ ಪಂಥದ ನೆರವಿನಿಂದ ಅಂತ್ಯ ಜನರನ್ನು ಸನಿಹಕ್ಕೆ ಬರಮಾಡಿಕೊಂಡನು. ಅವರಲ್ಲಿ ತಿಳುವಳಿಕೆ ಬಿತ್ತಿದನು ಅವರ ಕೊಳೆಯನ್ನು ತೊಳೆಯಿಸಿದನು. ಅವರೊಳಗಿನ ಮನುಷ್ಯತ್ವವನ್ನು ಎಚ್ಚರಿಸಿದನು. ಅವರನ್ನು ಶಿಷ್ಯರನ್ನಾಗಿ ಮಾಡಿ ಕೊಂಡನು. ಬುದ್ಧದೇವನು ಗತಿಸಿದ ಮೇಲೆ, ಅಂತ್ಯಜರ ಕಲ್ಯಾಣ ಕಾರ್ಯವು ನೆನೆಗುದಿಗೆ ಬಿದ್ದಿತು ಮೊದಲಿನಿಂದಲೂ ರೂಢಿಸಿದ ಭಾವನೆಯು ಸಮಾಜದ ಮನದಿಂದ ಕಿತ್ತು ಹೋಗಲಿಲ್ಲ. ಮತ್ತೆ ದಲಿತರು ದಲಿತರಾಗಿಯೇ ಉಳಿದರು. ಊರಿದ್ದಲ್ಲಿ ಹೊಲಗೇರಿ ಕಡೆಗೇ ಉಳಿಯಿತು.

ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರು, ಕಲ್ಯಾಣ ಧ ಹಬ್ಬಿಸತೊಡಗಿದರು. "ಹೊಲೆಯ ಹೊಲೆಯನೆಂಬಿರಿ. ಊರೆ ವೇನಯ್ಯಾ ಹೊಲೆಯರು" ಎಂದು ಕೇಳುವರು. "ತಂದೆಗೆ ವಾದಿಸುವವ ಹೊಲೆಯ, ತಾಯಿಗೆ ಜರಿಯುವವನೇ ಹೊಲೆಯ" ಎಂದು ಹೇಳಿದರು. ಮಾದಿಗರ ಚನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದ ಅಂತ್ಯಜರೆನಿಸಿಕೊಳ್ಳುವವರೂ ಸತ್ಯ ಶರಣರಾಗಿ ಮೆರೆದರು. ಅವರು ಅಂತ್ಯಜರೆಂಬುದನ್ನು ಯಾರೂ ಗುರುತಿಸದಂತೆ ಮಾರ್ಪಾಡಾಯಿತು. ಬಸವಣ್ಣನವರು

ಅವರನ್ನು ಅದೆಂಥ ಗೌರವದಿಂದ ಕಾಣುತ್ತಿದ್ದರೆಂಬುದನ್ನು ಅನೇಕ ವಚನಗಳಲ್ಲಿ ಕಾಣಬಹುದಾಗಿದೆ. ಆದರಿಂದ ಬಸವಣ್ಣನವರ ದೊಡ್ಡ ಮನಸ್ಸು ಪ್ರಕಟವಾಗುವದಲ್ಲದೆ ದಲಿತರೆನಿಸಿಕೊಳ್ಳುವವರು ಅದೆಂಥ ಪವಿತ್ರ ಜೀವನವನ್ನು ಸಂಪಾದಿಸಿ ಯೋಗ್ಯತೆಯನ್ನು ಪಡೆಯಲಿಕ್ಕೆ ಸಾಧ್ಯವಿದೆ ಎಂಬ ಮಾತು ಸ್ಪಷ್ಟವಾಗುತ್ತದೆ. ಅಸ್ಪೃಶ್ಯರನ್ನೆಲ್ಲ " ಶರಣ ಸಮಾಜ '' ವೆಂಬ ಹೆಸರಿನಿಂದ ಕರೆಯಬೇಕೆಂಬ ಕಟ್ಟಳೆಯನ್ನು ಮಾತ್ರ ಬಸವಣ್ಣನವರು ಮಾಡಿ ಬಿಡಬಹುದಾಗಿತ್ತು. ಅಷ್ಟೇ ಮಾಡಿದ್ದರೆ, ಚೆನ್ನಯ್ಯ ಕಕ್ಕಯ್ಯ ಮೊದಲಾದವರು ಹಿರಿಮೆಗೆ ಏರುತ್ತಿದ್ದರೋ ಇಲ್ಲವೋ ಸಂಶಯವಿದೆ.

ಅಪ್ಪನು ನಮ್ಮ ಮಾದಾರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯ ನೆಮ್ಮಯ್ಯ, ಕಾಣಯ್ಯ
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ
ಎನ್ನನೇತಕ್ಕರಿಯಿರಿ, ಕೂಡಲಸಂಗಯ್ಯ

ಎನ್ನುವ ವಚನದಲ್ಲಿ, ಬಸವಣ್ಣನವರು ಪರಮಾತ್ಮನ ಒಲುಮೆ ಸಂಪಾದಿಸುವದಕ್ಕಾಗಿ ತನ್ನ ವಂಶ ಕೀರ್ತಿಯನ್ನು ಹೇಳಿಕೊಂಡಿದ್ದಾರೆ. ಆತ್ಮ ಯೋಗ್ಯತೆಯನ್ನು ಘನವಾಗಿ ಸಂಪಾದಿಸಿದ ದಲಿತ ವರ್ಗದ ಶಿವಶರಣರು ತನ್ನ ಮನೆತನದಲ್ಲಿ ತಂದೆ ಕಕ್ಕ ಅಣ್ಣಂದಿರೆಂದು ಬಸವಣ್ಣನವರು ಬಾಯಿ ಬಿಚ್ಚಿ ಉಸುರಿದ್ದಾರೆ. ಮನಬಿಚ್ಚಿ ಘೋಷಿಸಿದ್ದಾರೆ. ಎದೆ ಬಿಚ್ಚಿ ಡಂಗುರಿಸಿದ್ದಾರೆ. ಇಷ್ಟೇ ಅಲ್ಲ. "ಚೆನ್ನಯ್ಯ ನೆಮ್ಮಯ್ಯನು, ಚೆನ್ನಯ್ಯನ ...ಗನಾನು" ಎಂದೂ ಕೂಡಲಸಂಗನ ಮಹಾ ಮನೆಯಲ್ಲಿ ತಾನೊಬ್ಬ ... ಸಂತಾನ ಎಂದೂ ಹೇಳಿಕೊಂಡಿದ್ದಾರೆ. ಅದೆಂಥ ಗೌರವದ ...! ಇಲ್ಲಿ ಕೇಳಿರಿ—

ಭಕ್ತಿಯಿಲ್ಲದ ಬಡವನಾನಯ್ಯ—
ಕಕ್ಕಯ್ಯನ ಮನೆಯಲು ಬೇಡಿದೆ.
ಚೆನ್ನಯ್ಯನ ಮನೆಯಲು ಬೇಡಿದೆ.
ದಾಸಯ್ಯನ ಮನೆಯಲೂ ಬೇಡಿದೆ.

ಎನ್ನುವ ವಚನದಲ್ಲಿ ಅಸ್ಪೃಶ್ಯರನ್ನು ಉದ್ಧರಿಸುವ ಸುಳಿವು ಕಾಣಿ

ಸಿದೆ ಅಸ್ಪೃಶ್ಯರಿಂದ ಉದ್ಧಾರಗೊಳ್ಳುವ ಹೊಳವು ಕಾಣಿಸುತ್ತಿದೆ. "ಡೋಹಾರನೆಂದೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚೆನ್ನಯ್ಯನ?" ಎನ್ನುವಲ್ಲಿ ಅವರ ಜನ್ಮಗುಣವಳಿದು ಹೋಗಿದೆಯೆಂಬುದರ ಸ್ಪಷ್ಟ ಚಿಹ್ನ ಕಂಗೊಳಿಸುತ್ತದೆ. ಇದೀಗ ನಿಜವಾದ ಅಸ್ಪೃಶ್ಯ ಉದ್ಧಾರದ ಉದಾಹರಣೆ, ಅಸ್ಪೃಶ್ಯೋದ್ಧಾರದ ನಿಜವಾದ ರೀತಿ ನೀತಿ ಇದೇ ಆಗಿದೆ. ಮುಂದುವರಿದ ಜೀವಿಗಳು ದಲಿತರನ್ನು ಮೇಲಕ್ಕೆತ್ತಿ ತಮ್ಮ ಮಟ್ಟದಲ್ಲಿ ತಂದುಕೊಳ್ಳುವ ದಾರಿಯನ್ನು ಬಿಟ್ಟು, ತಾವೇ ದಲಿತರ ಮಟ್ಟಕ್ಕಿಳಿದು ಸಮಾನತೆಯಲ್ಲಿ ನಿಂತುಕೊಂಡೆವೆಂದು ಹೇಳುವ ದಾರಿ ಹಿಡಿದರೆ ಯಾರ ಉದ್ಧಾರವೂ ಆಗಲಾರದು. ತಿರುಗಿ ಕೇಳಿದರೆ ಸರ್ವರ ಪತನ ಮಾತ್ರ ಆಗುತ್ತದೆಂದು ಹೇಳಬಹುದು. ಎಲ್ಲರಿಗೂ ಕುಡಿಯಲು ನೀರು ಒಂದೇ, ನಿಲ್ಲಲು ನೆಲವೊಂದೇ ಕಣ್ಣಿಗೆ ಬೆಳಕೊಂದೇ ಇರುವಾಗ— "ನಡುವೆ ಕುಲಗೊತ್ರಗಸಣಿ ಎತ್ತಣದು" ಎಂದು ಕಿಡಿ ನುಡಿಯ ಸರ್ವಜ್ಞ ಕವಿಯು ಕೇಳುತ್ತ ಹೊರಟಾಗ ಅವನಿಗೆ ಪ್ರತಿನುಡಿ ಹೇಳುವವರು ಯಾರೂ ದೊರೆಯಲಿಲ್ಲ.

ಕರ್ನಾಟಕದಲ್ಲಿ ಶರಣರ ಆಂದೋಲನವು ದಲಿತೋದ್ಧಾರದ ಕಾರ್ಯವನ್ನು ಹೂಡಿ ಸಾಕಷ್ಟು ಯಶಸ್ಸು ಸಂಪಾದಿಸಿತು. ಕೊನೆಗೆ ಮಧುವರಸನೆಂಬ ಬ್ರಾಹ್ಮಣ ಕನ್ಯೆಯನ್ನ ಹರಳಯ್ಯನೆಂಬ ದಲಿತನ ಮಗನೊಡನೆ ಮದುವೆ ಮಾಡುವ ಮಂಗಲ ಕಾರ್ಯದಲ್ಲಿ ವಿರಸವು ತಲೆದೊರಿತು. ಅದರಿಂದ ಹೂಡಿದ ಆಟವೆಲ್ಲ ಮಾಟವಾಯವಾಗಿ ಬಿಟ್ಟಿತು. ಆಗ ಕಾಲವಿನ್ನೂ ಪರಿಪಕ್ವವಾಗಿರಲಿಲ್ಲವೆನ್ನಬೇಕು.

ಮಹಾರಾಷ್ಟ್ರದಲ್ಲಿಯೂ ಸಂತರ ಆಂದೋಲನವು ಪ್ರಾರಂಭವಾಗಿ ಅದೆಷ್ಟೋ ದಲಿತರು ವಿಠ್ಠಲ ಭಕ್ತಿಯಿಂದ ಶ್ರೇಷ್ಠಜೀವಿಗಳಾಗಿ ಮೆರೆದರು. ಇಂಥ ದಲಿತೋದ್ಧಾರದ ಸಣ್ಣ ಪುಟ್ಟ ಕಾರ್ಯಗಳು ಭಾರತದ ಬೇರೆ ಬೇರೆ ಭಾಗಗಳಲ್ಲಿ ಕಾಲಕಾಲಕ್ಕೆ ನಡೆಯುತ್ತ ಬಂದವು.

ಇಪ್ಪತ್ತನೇ ಶತಮಾನದಲ್ಲಿ ಮ. ಗಾಂಧಿಯವರು ಅಸ್ಪೃಶ್ಯತೆಯೊಂದು ಭಾರತೀಯರಿಗೆ ಮಹಾಕಲಂಕವೆಂದು ಸಾರಿದರು. ಅವರ ಕಲ್ಯಾಣಕ್ಕಾಗಿ ಅವರು ತನುಮನಧನಗಳನ್ನು ಸವೆಯಿಸಿದರು. 'ಲಕ್ಷ್ಮೀ' ಎಂಬ ದಲಿತ ಬಾಲಿಕೆಯನ್ನು ಸಾಕಿ ಸಲುಹಿ, ಉಚ್ಚ ವರ್ಣದ ತರುಣನೊಬ್ಬನ ಕೂಡ ಮದುವೆ ಮಾಡಿದರು. ಬಸವಣ್ಣನವರ ಕಾಲಕ್ಕೆ ಸಾಧಿಸದ ಕಾರ್ಯವು

ಗಾಂಧಿಯವರ ಕಾಲಕ್ಕೆ ಆಡಾಡುತ್ತ ಕೊನೆಗಂಡಿತು. ಹನ್ನೆರಡನೇ ಶತಮಾನದಲ್ಲಿದ್ದ ಬಿಗಿತವು ಇಪ್ಪತ್ತನೇ ಶತಮಾನದಲ್ಲಿ ಸಡಿಲಾಗಿ ಬಿಟ್ಟಿತು. ದಲಿತರಲ್ಲಿ ವಿದ್ಯಾಭ್ಯಾಸಗಳು ಬೆಳೆದವು. ಅವರಿಗೆ ಸಮಾಜದಲ್ಲಿ ಸಾಕಷ್ಟು ಸಮಾನತೆಯು ದೊರೆಯತೊಡಗಿತು. ಸಾರ್ವಜನಿಕರ ಉಪಹಾರ ಮಂದಿರದಲ್ಲಿ ದಲಿತರು ಹೋಗಿಬರಲಿಕ್ಕೆ ದಾರಿಯಾಯಿತು ಮಂದಿರ ಪ್ರವೇಶವು ಕೈಗೂಡಿತು ದಲಿತೋದ್ಧಾರದ ಮಾರ್ಗದಲ್ಲಿ ಹಲವರು ಹಲವು ವಿಧವಲ್ಲಿ ಕಾರ್ಯ ಕೈಕೊಂಡರು. ಅಸ್ಪೃಶ್ಯರು ಹರಿಜನರೆಂದು ಕರೆಯಿಸಿಕೊಂಡುದು ಇದೇ ಕಾಲದಲ್ಲಿಯೇ ಅವೆಷ್ಟೋ ಸಂಸ್ಥೆಗಳು ಮೈದಾಳಿ ಹರಿಜನರ ಕುಂದು ಕೊರತೆಗಳನ್ನು ಸರಿಪಡಿಸುವ ಕಾರ್ಯದಲ್ಲಿ ನಿರತವಾದವು ಅದೆಷ್ಟೋ ಜನ ಮಹನೀಯರು ಅವರ ಸೇವೆಯಲ್ಲಿಯೇ ತಮ್ಮ ಜನ್ಮ ಸಾರ್ಥಕವಿದೆಯೆಂದು ಆಯುಷ್ಯವನ್ನು ಧಾರೆಯೆರೆದರು. ಸಮಾಜದಲ್ಲಿ ಹರಿಜನರಿಗೆ ಮನ್ನಣೆ ದೊರಕಿಸಿ ಕೊಡುವ ಸಲುವಾಗಿ ಮ. ಗಾಂಧಿಯವರ ಮಹಾಉಪವಾಸ ವ್ರತವನ್ನು ಕೈಕೊಂಡು ಮುಗಿಸಿದರು. ಫಂಡು ಕೂಡಿಸಿದರು, ತಾವೂ ಅಸ್ಪೃಶ್ಯರೆಂದು ಹೇಳಿಕೊಂಡರು ಹರಿಜನರ ಸೇವೆಯು ತಮ್ಮಪೂರ್ವ ಕರ್ಮದ ಪ್ರಾಯಶ್ಚಿತ್ತವೆಂದು ಬಗೆದರು, ಮ. ಗಾಂಧಿಯವರಲ್ಲಿ ಮೊಳೆತ ಹರಿಜನ ಸೇವೆಯ ಎಲ್ಲ ವಿಚಾರಗಳು ಭಾರತೀಯರೆಲ್ಲರಲ್ಲಿ ಎಚ್ಚರಿಕೆಯನ್ನು ಮಾಡಿದವು.

ವಿಶ್ವ ಕವಿಗಳಾದ ರವೀಂದ್ರನಾಥ ಠಾಕೂರರು ಸಹ ತಮ್ಮ ಜಗತ್ ಪ್ರಸಿದ್ಧವಾದ 'ಗೀತಾಂಜಲಿ' ಯಲ್ಲಿ ಅಸ್ಪೃಶ್ಯತೆಯ ಕಲಂಕವನ್ನು ಸ್ಮರಿಸಿ ಕಳವಳಗೊಂಡರು 'ದಲಿತರ ಶಾಪ' ವು ಭಾರತಕ್ಕೆ ಅದೆಂಥ ಹೀನದಶೆ ತಂದೊಡ್ಡಿತೆಂದು ಮನಮರುಗಿ ಕನವರಿಸಿದರು.

ಎಲೆ ನನ್ನ ದುರ್ದೈವಿ ದೇಶವೆ, ಗೈದಿರುವೆ ಯಾರಿಗಪಮಾನವ
ತಳೆವೆಯೋ ಅವರೆಲ್ಲರವಮಾನ ಶಾಪದಲಿ ಅವರಂಥದೇ ಸ್ಥಾನವೆ?
ಮನುಕುಲದ ಮಕ್ಕಳಾ ಮೈಯನ್ನೆ ಮುಟ್ಟದಲೆ ಪ್ರತಿದಿನವು
ಜನದಂತರಂಗದಧಿದೇವತೆಯ ಅಪಮಾನಗೈದಿಹೆ ತಿರಸ್ಕರಿಸುತ
ನಿನ್ನ ಉನ್ನತಾಸನದಿಂದ ದಲಿತರ ತಳ್ಳಿರುವೆ ಎಲ್ಲಿ ತಕ್ಕೆ—
ಇನ್ನೇನು ನಿನ್ನಾತ್ಮ ಶಕ್ತಿಯನೆ ಅರಿಯದಲೆ ಚೆಲ್ಲಿರುವೆ ಅಲ್ಲಿ ಅಲ್ಲಿ!

ಅವರೆಲ್ಲ ನಿನ್ನಡಿಯ ಬುಡದಲ್ಲಿಯೇ
ಸವೆದು ಸಣ್ಣಾಗಿಹರು ಹುಡಿಯಲ್ಲಿಯೇ
ಕೆಳಗಿಳಿಯೊಡಿಯರ ಬಳಿ, ನಿನ್ನ ವಿಧಿ ಅರಿಯದೈ ಬೇರಾವ ತ್ರಾಣವ
ನೀನಿಂತು ಕೆಳಗೆ ನೂಕಿದ ಜನರೆ ನಿನ್ನನ್ನು ಕಟ್ಟಿ ಕೆಳಕೆಳಗೆಳೆವರು
ನೀನೆ ಹಿಂದಕೆ ಸರಿಸಿದಾ ಜನರೆ ನಿನ್ನನ್ನು ಹಿಂದಕ್ಕೆ ಸೆಳೆಸೆಳೆವರು !

ಬಚ್ಚಿಡುತ ಜ್ಞಾನವನು ದೀರ್ಘ ಶ್ರಮದಿ
ಮುಚ್ಚಿರುವಿ ಯಾರನೆಜ್ಞಾನ ತಮದಿ
"ಅಳಿಗುಲ"ದ ಆ ಜನವೆ ಮಂಗಲವೆ ಮುಚ್ಚಿಹುದು ಮುಕ್ತಿ ನಿನ್ನಯ ಪ್ರಾಣವ
ತಳಿವೆಯೋ ಅವರೆಲ್ಲರಪಮಾನ ಶಾಪದಲ್ಲಿ ಅವರಂಥದೇ ಸ್ಥಾನವ ||
ಕಣ್ಣನಿಡು ದ್ವಾರದಲಿ ಯಮದೂತ ನಿಂತಿಹನು ಪ್ರಾಣವನು ಮುಕ್ಕುವವನು
ನಿನ್ನ ಜಾತಿಯ ಅಹಂಕಾರಕ್ಕೆ ಅಭಿಶಾಪದಂಕಿತವನಿಕ್ಕುವವನು ||
ಎಲ್ಲರನು ನೀನಿಂದು ಕರೆಯದಿರಲು
ಎಲ್ಲರೊಡನೆಯೆ ನೀನು ಬೆರೆಯದಿರಲು
ಗರುವದಲಿ ನಿನ್ನನ್ನೆ ನಾಲ್ದೆಸೆಗೆ ಬಿಗಿಯುತ್ತ ಮೃತ್ಯುವಿಗೆ ತಲೆಬಾಗುವಿ
ಮೃತ್ಯು ಮಧ್ಯದಿ ಸಿಲುಕಿ ಚಿತೆಯ ಭಸ್ಮದಿ ಕೊನೆಗೆ ಎಲ್ಲರೊಡನೊಂದಾಗುವಿ.

ಭಾರತೀಯರು ದಲಿತರನ್ನು ನಡೆಯಿಸಿಕೊಳ್ಳುವ ರೀತಿಯಲ್ಲಿಯೇ ಭಾರತೀಯರನ್ನು ಪರನಾಡಿನವರು ನಡೆಸಿಕೊಳ್ಳುವದು ಏತರ ಫಲವಾಗಿ? ದಕ್ಷಿಣ ಆಫ್ರಿಕದಲ್ಲಿ ಬಿಳಿಯರಿಗೆ ನಾವು ಕರಿಯರು! ಅವರ ದೃಷ್ಟಿಯಲ್ಲಿ ನಾವು ಹೊಲೆಯರು! ಭಾರತೀಯರಿಗೆ ದಲಿತರು ಅಡಿಯಾಳು ಹುಡಿಯಾಳ ಆಗಿರುವಂತೆ, ಭಾರತೀಯರು ಪರಕೀಯರಿಗೆ ಅಡಿಯಾಳಾಗಿ ಹುಡಿಯಾಳಾಗಿ ಮಾಡಿದ ಕರ್ಮವನ್ನು ತೊಳಕೊಂಡೆವು. ದಲಿತರ ಸ್ವಾತಂತ್ರ್ಯವು ಅನ್ನಿಗರ ಕಾಲಕೆಳಗೆ ಹೊರಳಾಡಿತು. ಅದೇತರ ಫಲ ? ಎಂಬರ್ಥದಲ್ಲಿ ರವೀಂದ್ರನಾಥರು. ಭಾರತೀಯರ ಪರವಾಗಿ ತಮ್ಮ ಪಶ್ಚಾತ್ತಾಪವನ್ನು ತೋಡಿಕೊಂಡರು. ಭಾರತೀಯರಿಗೆ ದಲಿತರೊಡ್ಡಿದ ಶಾಪವೆಂದು ಭಾವಿ

ಸಿದರು. ದಲಿತೋದ್ಧಾರವು ಭಾರತಿಯರ ಆತ್ಮೋದ್ಧಾರವೇ ಆಗಿದೆ ಯೆಂದು ಒಪ್ಪಿದರು.

ದೊಡ್ಡವರ ವಿಚಾರಗಳು ದೊಡ್ಡವಿರುತ್ತವೆ. ಅವುಗಳನ್ನು ನಾವು ಅನಕಾ ಬದಿಗಿರಿಸೋಣ. ನಮ್ಮಲ್ಲಿಯೇ ನಾವು ವಿಚಾರಿಸಿ ಅಸ್ಪೃಶ್ಯತೆಯ ಬಗ್ಗೆ ನಿರ್ಣಯಕ್ಕೆ ಬರಬಹುದಾಗಿದೆ. ಮೊಟ್ಟಮೊದಲು ನಾವೆಲ್ಲರೂ ಮನುಷ್ಯರು. ಮನುಷ್ಯರು ಮನುಷ್ಯರು ಮುಟ್ಟಿಸಿಕೊಳ್ಳುವದಿಲ್ಲ ವೆನ್ನುವುದು ನಾಚಿಕೊಳ್ಳುವಂಥ ಮಾತಾಗಿದೆ. ಏಕೆಂದರೆ, ಕುದುರೆ, ಎತ್ತು ಆಕಳು ಎಮ್ಮೆಗಳನ್ನು ಬಿಟ್ಟು ಕೊಟ್ಟರೂ ನಾಯಿ ಬೆಕ್ಕುಗಳನ್ನು ಸಹ ಮುಟ್ಟುವದಕ್ಕೆ ನಮಗೆ ಅಸಹ್ಯವೆನಿಸುವದಿಲ್ಲ. ಅವುಗಳ ಕೂಡ ಚಕ್ಕಂದ ಮಾಡುತ್ತೇವೆ. ಮೈಮೇಲೆ ಅವು ಬಂದು ಕುಳಿತರೂ ನಮಗೆ ಮೈಲಿಗೆ ಅನಿಸುವದಿಲ್ಲ. ಅಂದಮೇಲೆ ದಲಿತರನ್ನು ಮುಟ್ಟಿಸಿಕೊಳ್ಳಲಿಕ್ಕೆ ತಡೆಯೇಕೆ? "ಅವರು ಹೊಲಸು ಕೆಲಸ ಮಾಡುತ್ತಾರೆ, ಹೊಲಸು ತಿನ್ನುತ್ತಾರೆ; ಹೊಲಸು ಕಾಣಿಸುತ್ತಾರೆ ಆದಕಾರಣ ಅಂಥವರನ್ನು ಮುಟ್ಟಿಸುವುದಕ್ಕೆ ಹೇಸುತ್ತೇವೆ" ಎಂದು ಹೇಳುವರುಂಟು. ಹೊಲಸು ಕೆಲಸ ಮಾಡುವ ಇತರ ಜನರಿದ್ದಾರೆ; ಅವರ ಮೈ ಬಟ್ಟೆಗಳೂ ಹೊಲಸು ನಾರುತ್ತವೆ. ಆದ ರೇನು? ನಾವು ಅವರನ್ನು ಮುಟ್ಟಿಸಿಕೊಳ್ಳುವದಕ್ಕೆ ಹಿಂದೆಮುಂದೆ ನೋಡುವ ದಿಲ್ಲ. ಒಡ್ಡರು, ಕಟುಕರು, ಲಮಾಣಿಗಳು, ಕೊರವರೇ ಮೊದಲಾದವರ ಇರುವಿಕೆ ಹೊಲಸು; ಅವರ ಬಟ್ಟೆಗಳೂ ಕೊಳೆಯಾಗಿರುತ್ತವೆ. ಆದರೂ ಅವರು ಅಸ್ಪೃಶ್ಯರೆನ್ನಿಸಿಕೊಳ್ಳುವದಿಲ್ಲ. ತೀರ ಹೇಸಿಕೆ ಬರುವಂತೆ ಹೊಲಸು ಮಾಡಿಕೊಳ್ಳುವ ಹೊಟ್ಟೆಯ ಮಕ್ಕಳನ್ನು ಸಹ ಸ್ವಚ್ಛವಾಗುವ ವರೆಗೆ ನಾವು ಮುಟ್ಟಿಸಿಕೊಳ್ಳುವದಿಲ್ಲ. ಜಳಜಳವಾಗಿ ಮೈ ತೊಳಕೊಂಡು, ಮಡಿಯಾಗಿರುವ ಬಟ್ಟೆ ಧರಿಸಿಕೊಂಡರೆ ಅವರನ್ನೂ ಸನಿಹಕ್ಕೆ ಬರಮಾಡಿ ಕೊಂಡು ಮುದ್ದಾಡುವದಿಲ್ಲವೇ? ಹೊಲೆಯರೆನ್ನಿಸಿಕೊಳ್ಳುವವರೂ ಶುಚಿ ಯಾಗಿ ನಮ್ಮ ಬಳಿಗೆ ಬಂದರೆ ಅವರನ್ನೇಕೆ ಮುಟ್ಟಿಸಿಕೊಳ್ಳಬಾರದು ? ಅವರು ಶುಚಿಯಾಗುವದಕ್ಕೆ ತಿಳಿಹೇಳುವುದೂ ಸಹಾಯ ನೀಡುವುದೂ ನಮ್ಮ ಕರ್ತವ್ಯವಲ್ಲವೇ ?

ಎಷ್ಟೋ ಜನರು ಅಸ್ಪೃಶ್ಯರಂತೆ ಕಾಣಿಸುವದೇ ಇಲ್ಲ. ಅಸ್ಪೃಶ್ಯ ರೆಂದು ತಾವಾಗಿ ಹೇಳಿಕೊಂಡಾಗ ದೂರ ಸರಿದು "ಮುಟ್ಟಬೇಡ" ಎನ್ನು ತ್ತೇವೆ. ಅಂಥಲ್ಲಿ, ಅವರು ಅಸ್ಪೃಶ್ಯರೆಂದು ಹೇಳಿಕೊಳ್ಳುವದೇ ತಪ್ಪೆಂದು ಸಿದ್ಧವಾಗುತ್ತದೆ. ನಿನ್ನ ಹೆಸರೇನೆಂದು ಯಾರಿಗಾದರೂ ಕೇಳಿದಾಗ ಅವರು 'ರಾಮ್ಯಾ' ಎಂದು ಹೇಳಿದರೆ, ಕೇಳಿದವರೆಲ್ಲರೂ ಅವನನ್ನು ರಾಮ್ಯಾ ಎಂದೇ ಕೂಗುವೆವು. ಆದರೆ ಅವನೇ ಮೊದಲು ತನ್ನ ಹೆಸರು "ರಾಮ ಚಂದ್ರ"ನೆಂದು ಹೇಳಿದರೆ, ಕೇಳಿದವರು ಅವನನ್ನು "ರಾಮಚಂದ್ರ" ಎಂದೇ ಕೂಗುವರು. ತಾನೇ ಕುಳಿತು ತನ್ನನ್ನು "ಹೊಲಿಯ"ನೆಂದು ಹೇಳಿಕೊಂಡರೆ, ಎಲ್ಲರೂ 'ಹೊಲೆಯ'ನೆಂದು ಹೇಳುವುದು ಸಹಜವಾಗಿದೆ. ಆದ್ದರಿಂದ ತಾವು ಅಸ್ಪೃಶ್ಯರೆಂದಾಗಲಿ ಹೊಲೆಯರೆಂದಾಗಲಿ ಎಂದು ಹೇಳಿ ಕೊಳ್ಳುವುದನ್ನು ಒಮ್ಮೆಲೆ ಬಿಟ್ಟು ಬಿಡತಕ್ಕದ್ದು. ಅದರಿಂದ ಹೊಲೆಯ ಎಂಬ ಶಬ್ದವು ಬಳಕೆಯೊಳಗಿಂದ ಹೋಗಿಯೇ ಬಿಡುತ್ತದೆ.

ಬಹುಕಾಲದ ಸಂಸರ್ಗದಿಂದ ಅಥವಾ ವಂಶಾನುವಂಶ ಬಂದ ಪರಿ ಪಾಠದಿಂದ ಅಸ್ಪೃಶ್ಯರೆಂದು ತಿಳಿದವರನ್ನು ಮುಟ್ಟಿಸಿಕೊಳ್ಳುವದಕ್ಕೆ ಮನಸ್ಸು ಒಪ್ಪುವದಿಲ್ಲವೆನ್ನುವಮಾತು ನಿಜ. ಆದರೆ, ಅವರೂ ಮನುಷ್ಯರೆಂದೂ, ನಾವಾ ಗಿಯೇ ಅವರನ್ನು ದೂರ ತಳ್ಳಿದ್ದೇವೆಂದೂ, ಅಸ್ಪೃಶ್ಯತೆಯು ಸಮಾಜದ ಘೋರತರವಾದ ಕೊಳೆಯೆಂದೂ ವಿಚಾರಿಸಿದಾಗ ನಮ್ಮ ಮನಸ್ಸು ಉದಾ ರವಾಗಿ, ಅವರೂ ನಮ್ಮ ಹತ್ತಿರದ ಬಂಧುಗಳೆಂಬ ಭಾವನೆ ಬಲಿಯು ವದು. ಅವರನ್ನು ಇತರ ಬಂಧುಗಳಂತೆ ಮುಟ್ಟಿಸಿಕೊಳ್ಳುವುದು ತಪ್ಪಲ್ಲ ವೆಂಬ ವಿಚಾರವು ದೃಢವಾಗುವದು. ಅವರಿಗೂ ನಮಗಿರುವಂತೆ, ಮಾನಾ ಪಮಾನದ ಕಲ್ಪನೆಯಿರುವದೆಂಬ ಎಚ್ಚರಿಕೆಯು ನಿರಂತರವಾಗುವದು.

ಅವರನ್ನು ದಲಿತರೆಂದು ದೂರ ತಳ್ಳಿದ್ದರಿಂದ ರಾಜಕೀಯದಲ್ಲಿಯೂ, ಸಮಾಜದಲ್ಲಿಯೂ ಅನೇಕ ಹಾನಿಗಳು ನಮಗೊದಗಿವೆ. ಇಲ್ಲವೆ ಆಗತಕ್ಕ ಲಾಭಗಳು ಕೈ ಬಿಟ್ಟಿವೆ. ನಮ್ಮಲ್ಲಿರುವ ಅಸ್ಪೃಶ್ಯತಾ ಭಾವನೆಯನ್ನು ದುರುಪ ಯೋಗ ಮಾಡಿಕೊಂಡು ಪರಕೀಯರು ತಮ್ಮ ಬೇಳೆಯನ್ನು ಬೇಯಿಸಿ ಕೊಂಡಿದ್ದಾರೆ. ಅದೆಷ್ಟೋ ಅಸ್ಪೃಶ್ಯರನ್ನು ಪರಕೀಯರು ಧರ್ಮಾಂತರ ಗೊಳಿಸಿ ಮುಸಲ್ಮಾನರನ್ನಾಗಿ, ಕ್ರಿಶ್ಚನ್ನರನ್ನಾಗಿಯೂ ಮಾಡಿದ್ದಾರೆ. ಅದ ರಿಂದ ನಮ್ಮವರ ಸಂಖ್ಯೆ ಕಡಿಮೆ ಆಯಿತಲ್ಲದೆ, ಧರ್ಮಾಂತರಗೊಂಡವರೇ

ನೆಪ್ಪ ಕಾಲ್ತೊಡಕಾಗಿ ನಮ್ಮನ್ನು ಕೆಡವಿಬಿಡುವದಕ್ಕೆ ಕಾರಣರಾಗುತ್ತಲಿದ್ದಾರೆ. ಧರ್ಮಾಂತರಗೊಂಡ ಅಸ್ಪೃಶ್ಯನು ಮುಸಲ್ಮಾನನಾಗಿ ಇಲ್ಲವೆ ಕ್ರಿಶ್ಚನ್‌ನಾಗಿ ಬಂದರೆ, ಅವನನ್ನು ಸಾಹೇಬನೆಂದು ಮೇಲಕ್ಕೆ ಕರೆಯುತ್ತೇವೆ. ಕೈ ಕೈ ಕುಲುಕಿಸುತ್ತೇವೆ. ಬೂಟುಗಾಲಿನಿಂದ ಮಂದಿರದೊಳಗೂ ಕರೆದುಕೊಳ್ಳುತ್ತೇವೆ. ಆಗ ಅವರ ಅಸ್ಪೃಶ್ಯತೆಯೆಲ್ಲ ತೊಲಗಿಬಿಟ್ಟಿರುತ್ತದೆ. ಅವರನ್ನು ಮುಟ್ಟಿಸಿಕೊಳ್ಳಬಾರದೆನ್ನುವ ವಿಚಾರವೇ ಸುಳಿಯುವದಿಲ್ಲ.

ಅಸ್ಪೃಶ್ಯರ ಅಸ್ಪೃಶ್ಯತೆಯನ್ನು ಕಳೆಯುವದು ಮುಸಲ್ಮಾನರಿಗೂ, ಕ್ರಿಶ್ಚನ್‌ರಿಗೂ ಸಾಧ್ಯವಿದ್ದಂತೆ, ಹಿಂದುಗಳಿಗೆ ಸಾಧ್ಯವಿಲ್ಲವೇ ? ಅಸ್ಪೃಶ್ಯರು ಹಿಂದುಗಳೆಂದು ಊರೊಳಗಿನ ಇತರ ಜನರೆಲ್ಲರೂ ಒಪ್ಪಿಕೊಳ್ಳುತ್ತಾರೆ. ತಾವು ಹಿಂದುಗಳೆಂದು ಅಸ್ಪೃಶ್ಯರೂ ಒಪ್ಪಿಕೊಳ್ಳುತ್ತಾರೆ. ಆದರೆ ಅಸ್ಪೃಶ್ಯತೆಯನ್ನು ಕಳೆಯುವುದು ಮಾತ್ರ ಯಾರಿಗೂ ಸಾಧ್ಯವಾಗಲಿಲ್ಲ. ಮುಸಲ್ಮಾನರೂ ಕ್ರಿಶ್ಚನ್‌ರೂ ಆ ಕೆಲಸ ಮಾಡತೊಡಗಿದರು. ಧರ್ಮಾಂತರ ಹೊಂದಿದ ಅಸ್ಪೃಶ್ಯರು ಮುಸಲ್ಮಾನರಿಗಾಗಿ, ಕ್ರಿಶ್ಚನ್‌ರಿಗಾಗಿ ಹಿಂದುಗಳಿಗೆ ಗಂಟಲಗಾಳದಂತೆ ತೊಡಕು ತಂದೊಡ್ಡಹತ್ತಲು, ಆಗ ಹಿಂದುಗಳಲ್ಲಿ ಕೆಲವರ ಕಣ್ಣು ತೆರೆದವು. ಕಣ್ಣು ತೆರೆದು ಪ್ರಯೋಜನವಿಲ್ಲ. ಬುದ್ಧಿ ತೆರೆಯಬೇಕಲ್ಲವೇ ? ಅಸ್ಪೃಶ್ಯರಾಗಲಿ ಇತರ ಹಿಂದುಗಳಾಗಲಿ ಪರಧರ್ಮವನ್ನು ಸೇರುವದಕ್ಕೆ ದಾರಿಯಿರುತ್ತದೆ. ಆದರೆ ಪರಧರ್ಮದವರು ಹಿಂದುಗಳಾಗಿ ಬರುವದಕ್ಕೆ ದಾರಿಯಿರುವದಿಲ್ಲ. ಅಷ್ಟೇ ಅಲ್ಲ, ಪರಧರ್ಮಿಗಳಾಗಿ ಹೋದವರು ಸಹ ತಿರುಗಿ ಬರುವುದಕ್ಕೆ ಮಾರ್ಗವಿಲ್ಲ. ನಮ್ಮವರ ಈ ಸಂಕುಚಿತ ಬುದ್ಧಿಯನ್ನು ಬಗೆದು ಕಳವಳಗೊಂಡು, ದಯಾನಂದ ಸರಸ್ವತಿಗಳು ಆರ್ಯಸಮಾಜವನ್ನು ಸ್ಥಾಪಿಸಿದರು. ಪರಧರ್ಮದವರನ್ನು ದೀಕ್ಷೆಕೊಟ್ಟು ಹಿಂದು ಧರ್ಮದಲ್ಲಿ ತಗೆದುಕೊಳ್ಳಲಿಕ್ಕೆ ಬರುತ್ತದೆಂದು ಶಾಸ್ತ್ರಾಧಾರಗಳನ್ನು ತೆಗೆದು ತೋರಿಸಿದರು. ವೇದದಲ್ಲಿ ಆ ಮಾತಿಗೆ ಒಪ್ಪಿಗೆಯಿದೆಯೆಂದು ಸಿದ್ಧಪಡಿಸಿದರು. ಆದರಿಂದ ಧರ್ಮಾಂತರ ಹೊಂದಿದ ಅಸ್ಪೃಶ್ಯರಾಗಲಿ, ಅಪೇಕ್ಷೆಯುಳ್ಳ ಪರಮಧರ್ಮದವರಾಗಲಿ ಹಿಂದುಗಳಾಗಿ ಬರುವದಕ್ಕೆ ದಾರಿಯಾಯಿತು. ತಮ್ಮ ಪ್ರಯತ್ನವು ವ್ಯರ್ಥವಾಗಹತ್ತಿತೆಂದು ಮುಸಲ್ಮಾನರೂ ಕ್ರಿಶ್ಚನ್‌ರೂ ತಳಮಳಿಸ ಹತ್ತಿದರು. ಆದರೇನು ? ದಯಾನಂದ ಸರಸ್ವತಿಗಳಾಗಲಿ, ಆರ್ಯಸಮಾಜದವರಾಗಲಿ ಅವರಿಗೆ ಬೆದರಲಿಲ್ಲ. ಅವರ ಬೆದರಿ

ಕೆಗೆ ಸೊಪ್ಪು ಹಾಕಲಿಲ್ಲ. ಅದೆಷ್ಟೋ ಜನ ಅಸ್ಪೃಶ್ಯರು, ಮುಸಲ್ಮಾನರಾಗಿದ್ದವರು ತಿರುಗಿ ಹಿಂದುಗಳಲ್ಲಿ ಆರ್ಯಸಮಾಜದವರಾಗಿ ಮರಳತೊಡಗಿದರು.

ಆದೊಂದು ಕ್ರಮವೇ ಆಗುವುದು ಅವಶ್ಯವಾಯಿತು. ಅದಕ್ಕೆ "ಶುದ್ಧಿ-ಸಂಘಟನೆ'' ಎಂಬ ಹೆಸರು ಉಂಟಾಯಿತು. ಆ ಕೆಲಸವನ್ನು ಮುಂದಾಳಾಗಿ ನಿರ್ವಹಿಸಿದವರಲ್ಲಿ ಮುಖ್ಯರಾದವರು ಶ್ರದ್ಧಾನಂದ ಸ್ವಾಮಿಗಳೂ ಒಬ್ಬರು. ಅವರದೊಂದು ವಿಚಿತ್ರವಾದ ಕಥೆಯೇ ಆದೆ. ಅದು ಪ್ರಾಸಂಗಿಕವಲ್ಲದಿದ್ದರೂ ಹೇಳಿಯೇ ಸಾಗುತ್ತೇನೆ, ಆ ಕಥೆ ಏನಂದರೆ:—

ಶ್ರದ್ಧಾನಂದ ಸ್ವಾಮಿಗಳು ಉತ್ತರ ದೇಶದವರು. ಪೋಲೀಸ ಖಾತೆಯಲ್ಲಿ ಒಬ್ಬ ಉನ್ನತ ಅಧಿಕಾರಿಗಳು. ಆ ಕಾಲಕ್ಕೆ ಅವರು ಮದ್ಯಪಾನದಲ್ಲಿ ಆಸಕ್ತರಾಗಿದ್ದರು. ತನ್ನಂತೆ ಅಧಿಕಾರಿಗಳಾದ ಮುಸಲ್ಮಾನ ಮಿತ್ರರೊಂದಿಗೆ ಯಥೇಚ್ಛವಾಗಿ ಕುಡಿಯುವರು. ಆ ನಿಶೆಯಲ್ಲಿ ಹಿಂದು ಮುಂದು ನೋಡದೆ ಅವೆಷ್ಟೋ ಅತ್ಯಾಚಾರಗಳನ್ನು ಮಾಡುತ್ತಿದ್ದರು. ಒಂದು ಸಾರೆ ಅವರ ಮಿತ್ರನು ಸೆರೆಕುಡಿದು, ಒಬ್ಬ ಹಿಂದು ಸ್ತ್ರೀಯನ್ನು ಬಲತ್ಕಾರಗೊಳಿಸಿ ಕಾಡುತ್ತಿರುವುದನ್ನು ಕಣ್ಣಾರೆ ಕಂಡರು. ಸೆರೆ ಕುಡಿದು ಅರಿವುಗೆಟ್ಟಾಗ ತಾವೂ ಅದೇ ಪ್ರಕಾರ ಅವಿವೇಕತನ ಮಾಡುತ್ತಿರಬಹುದಲ್ಲವೇ ಎಂದು ಬಗೆದು, ಸೆರೆ ಕುಡಿಯುವದನ್ನೇ ಸಂಪೂರ್ಣವಾಗಿ ಬಿಟ್ಟುಕೊಟ್ಟರು. ಅದರಿಂದ ಅವರ ಕಣ್ಣು ತೆರೆದವು. ತೆರೆದ ಕಣ್ಣಿನಿಂದ ಸುತ್ತಲಿನ ಪರಿಸ್ಥಿತಿಯನ್ನು ನೋಡ ತೊಡಗಿದರು. ಅದೇನು ಕಾಣಿಸಿತು? ಮುಸಲ್ಮಾನ ಬಂಧುಗಳು ನಡೆಯಿಸಿದ ಧರ್ಮಾಂತರದ ಕೆಲಸ! ಅತ್ಯಾಚಾರದ ಕೃತಿ!! ಅದನ್ನು ಕಂಡು ಹೇಸಿಕೊಂಡರು; ತಮ್ಮ ಜೀವಕ್ಕೆ ರೋಸಿಕೊಂಡರು. ನೌಕರಿ ಬಿಟ್ಟುಕೊಟ್ಟರು. ಆರ್ಯಸಮಾಜದಲ್ಲಿ ಸೇರಿದರು. ಅಲ್ಲಿ ಸನ್ಯಾಸ ದೀಕ್ಷೆ ತೆಗೆದುಕೊಂಡರು. ಅವರು ಅರಬಿ-ಫಾರ್ಸಿಭಾಷೆಗಳಲ್ಲಿ ಬಲ್ಲಿದರಾದ್ದರಿಂದ ಕುರಾನವನ್ನೂ ಚೆನ್ನಾಗಿ ಅಭ್ಯಸಿಸಿದ್ದರು. ಅವರು ಕುರಾನದ ಬಗ್ಗೆ ಪ್ರೀತಿಯನ್ನು ತೋರ್ಪಡಿಸುತ್ತಿದ್ದರು. ಅದನ್ನು ಕಂಡು ದಿಲ್ಲಿಯ ಮುಸಲ್ಮಾನರು ಅವರನ್ನು ಆಮಂತ್ರಿಸಿದರು, ಮಹಾ ವೈಭವದಿಂದ ಅವರನ್ನು ಕರೆದೊಯ್ದರು. ಕುರಾನದಲ್ಲಿ ಮಹಾಪಾರಂಗತರಾದ ಶ್ರೇಷ್ಠ ಧರ್ಮಗುರುಗಳನ್ನು ಮಾತ್ರ ಕುಳ್ಳಿರಿಸುತ್ತಿದ್ದ ಗದ್ದುಗೆಯ ಮೇಲೆ, ಶ್ರದ್ಧಾ

ನಂದರನ್ನು ಕುಳ್ಳಿರಿಸಿದರು. ಅಲ್ಲಿ ಕುಳಿತು ಅವರು ಕುರಾನ ಪ್ರವಚನ ಮಾಡಿದರು. ಅದನ್ನು ಲಕ್ಷಾವಧಿ ಮುಸಲ್ಮಾನರು ಅತ್ಯಂತ ಭಕ್ತಿಯಿಂದ ಕೇಳಿದರು. ಶ್ರದ್ಧಾನಂದರ ಜಯಜಯಕಾರವನ್ನು ಸಹ ಮಾಡಿದರು. ಮುಸಲ್ಮಾನರು ಅಷ್ಟೊಂದು ಮರ್ಯಾದೆಯನ್ನು ಯಾವ ಹಿಂದುವಿಗೂ ಮಾಡಿರಲಾರರು ಮಹಾಮಸೀದಿಯಲ್ಲಿ ಮುಸಲ್ಮಾನರಿಂದ ಅಂಥ ಮರ್ಯಾದೆಯನ್ನು ಯಾವ ಹಿಂದುವೂ ಪಡೆದಿರಲಿಕ್ಕಿಲ್ಲ. ಮುಂದೆ ಶ್ರದ್ಧಾನಂದರು ಶುದ್ಧಿ ಸಂಘಟನೆಯ ಕಾರ್ಯದಲ್ಲಿ ಸಂಪೂರ್ಣವಾಗಿ ಮುಳುಗಿದರು. ಆರ್ಯಸಮಾಜವು ಭರದಿಂದ ಬೆಳೆಯತೊಡಗಿತು. ಅದನ್ನು ಸಹಿಸಲಾರದೆ, ಯಾವನೋ ಒಬ್ಬ ಮುಸಲ್ಮಾನನು ಅವರನ್ನು ಅದೇ ದಿಲ್ಲಿಯಲ್ಲಿಯೇ ಕೊಲೆ ಮಾಡಿದನು. ಆ ಕೊಲೆಯ ಕಾರಣದಿಂದ ಅವೆಷ್ಟೋ ಕಣ್ಣುಗಳು ತೆಗೆದವು ಆ ಮಾತು ಬೇರೆ.

ಈ ಪ್ರಕಾರ ಹರಿಜನೋದ್ಧಾರ ಕಾರ್ಯದ ಅಂಗೋಪಾಂಗಗಳಲ್ಲಿ ನಮ್ಮ ದೇಶದ ಪ್ರಮುಖರು ಸೇರಿಕೊಂಡು, ತಮತಮಗೆ ಸರಿಯೆನಿಸಿದ ರೀತಿಯಲ್ಲಿ ಸಮಾಜ ಸೇವೆಗೆ ತೊಡಗಿದರೆಂಬುದನ್ನು ಕಾಣುವೆವು. ಮ. ಗಾಂಧಿ ಅವರೂ ಅವರ ಅನುಯಾಯಿಗಳೂ ಅತ್ಯಂತ ಪ್ರಾಮಾಣಿಕ ತನದಿಂದ ಹರಿಜನೋದ್ಧಾರದ ಕಾರ್ಯಗಳನ್ನು ಹಲವು ವಿಧದಲ್ಲಿ ಮಾಡಿದ್ದಾರೆ. ಅದು ಈಗಲೂ ಮುಂದುವರಿದಿದೆ. ಮ. ಗಾಂಧಿಯುವರು ಹರಿಜನರ ಸಲುವಾಗಿ ದೊಡ್ಡ ನಿಧಿ ಕೂಡಿಸಿದಂತೆ, 'ಹರಿಜನ' ಎಂಬ ಪತ್ರಿಕೆಯನ್ನು ವಾರಕ್ಕೆ ಪ್ರಕಟಿಸಿದರು. ಅವರು ಅಸ್ಪೃಶ್ಯತೆಯನ್ನು ಹಿಂದು ಸಮಾಜಕ್ಕಿರುವ ದೊಡ್ಡ ಕಲಂಕವೆಂದು ಭಾವಿಸಿದರು. ಅದೊಂದು ಸಮಾಜಕ್ಕೆ ಅತ್ಯಂತ ಅಪಮಾನಕಾರಕವೆಂದು ಬಗೆದರು. ತಲೆ ತಲಾಂತರಗಳಿಂದ ಮಾಡುತ್ತ ಬಂದ ಪಾಪವನ್ನು ಕಳಕೊಳ್ಳುವ ಪ್ರಾಯಶ್ಚಿತವೆಂದು ನಂಬಿದರು. ಅದಕ್ಕಾಗಿ ಅವರು ಮಾಡಿದ ಉಪವಾಸಗಳಿಗೆ ಲೆಕ್ಕವಿಲ್ಲ. ಪ್ರಾರ್ಥನೆಗಳಿಗೆ ಅಳತೆಯಿಲ್ಲ. ಹರಿಜನರ ಸಲುವಾಗಿ ಅವೆಷ್ಟೋ ಹಕ್ಕುಬಾಧ್ಯತೆಗಳನ್ನು ದೊರಕಿಸಿಕೊಟ್ಟರು.

ಮ. ಗಾಂಧಿಯವರ ತಪಸ್ಸಿನಿಂದ ಅಸ್ಪೃಶ್ಯತೆಯು ಭರದಿಂದ ತೊಲಗ ಹೊತಗಿತು. ಅವರನ್ನು ಮುಟ್ಟಿಸಿಕೊಳ್ಳುವದಕ್ಕೆ ಭಾರತೀಯರು ಹೃದಯ ಪೂರ್ವಕವಾಗಿ ಸಿದ್ಧರಾದರು. ಆದರೆ ಅಸ್ಪೃಶ್ಯರೆನ್ನುವವರೇ ಅದನ್ನು

ಅಲ್ಲಗಳೆಯತೊಡಗಿದರು. ಉಚ್ಚವರ್ಣದವರನ್ನು ಮುಟ್ಟಿ ಅವರನ್ನು ಭ್ರಷ್ಟಗೊಳಿಸುವದು ಪಾಪದ ಕೆಲಸವೆಂದು ಹಿಂಜರಿಯಹತ್ತಿದರು. ಇದೊಂದು ಕಲಿಯುಗದ ಕೆಡುಗಾಲವೆಂದು ಕಳವಳಿಸಹತ್ತಿದರು. ಹರಿಜನರ ಆ ತಿಳಿಗೇಡಿ ತನವನ್ನು ಹೋಗಲಾಡಿಸುವುದೂ ದೇಶದ ಮುಂದಾಳುಗಳ ಹಿರಿಯ ಕೆಲಸವೇ ಆಗಿಬಿಟ್ಟಿತು.

ನಗರಗಳಲ್ಲಿ ಮಾತ್ರ ಕಾಣಿಸಿಕೊಂಡ ಈ ಆಂದೋಲನವು ಕ್ರಮವಾಗಿ ಹಬ್ಬುತ್ತ ಹಬ್ಬುತ್ತ ಪ್ರತಿಯೊಂದು ಹಳ್ಳಿಯನ್ನು ಪ್ರವೇಶಿಸಿತು. ಸಾರ್ವಜನಿಕರ ಜಲಾಶಯಗಳಿಗೆ ಹೋಗಿ ಕುಡಿಯಲಿಕ್ಕೆ ನೀರು ದೊರಕಿಸುವುದೂ ಕಷ್ಟವಾಗಿರುವ ಪರಿಸ್ಥಿತಿಯನ್ನು ದೂರಗೊಳಿಸುವ ಕಾರ್ಯ ಸಾಗಿತು. ಕುಡಿಯುವ ನೀರಿನಂತೆ, ಸಾರ್ವಜನಿಕರೊಡನೆ ಉಪಹಾರ ಗೃಹಗಳನ್ನು ಪ್ರವೇಶಿಸಿ ತಿನ್ನುಣ್ಣುವ ಕೆಲಸವು ನಿರ್ವಿಘ್ನವಾಗಿ ಸಾಗುವಂತೆ ಕಾಯ್ದೆ ಕಟ್ಟಳೆಗಳೂ ಕಾಣಿಸಿಕೊಂಡವು. ಇಷ್ಟಾದರೂ ಅಸ್ಪೃಶ್ಯತೆಯು ಬೇರು ಸಹಿತವಾಗಿ ಇನ್ನೂ ಕಿತ್ತಿ ಹೋಗಿಲ್ಲ. ಅಸ್ಪೃಶ್ಯರಲ್ಲಿ ಜಾಗ್ರತಿಯಾಗಿದೆ. ಉಚ್ಚವರ್ಣದವರಿಗೆ ಸಹ ಅಸ್ಪೃಶ್ಯನಿವಾರಣೆಯ ಅರ್ಥ ತಿಳಿದಿದೆ. ಅದರ ಮಹತ್ವ ಹೊಳೆದಿದೆ. ಅದರ ಆವಶ್ಯಕತೆಯು ಮನವರಿಕೆಯಾಗಿದೆ. ಆದರೂ ಆಗ ತಕ್ಕಷ್ಟು ಕಾರ್ಯ ಆಗಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ.

ಹರಿಜನೋದ್ಧಾರದ ಕಾರ್ಯವು ಹದಕ್ಕೆ ಬಂದಿರುವದಾದರೂ, ಸ್ಪಷ್ಟವಾಗಿ ಹೊರಜೀವನದಲ್ಲಿ ಕಾಣಿಸಿಕೊಳ್ಳಲಾಗಿದೆ. ಮುಚ್ಚುಮರೆಯಲ್ಲಿ ಹರಿಜನರೊಡನೆ ಅವೆಷ್ಟೋ ಸಂಬಂಧಗಳು ಬೆಳೆದಿವೆ. ಮೈಲಿಗೆ ಮಾಯವಾಗಿದೆ ಅವರನ್ನು ಮುಟ್ಟಿಸಿಕೊಳ್ಳುವುದು ದೋಷವೆಂಬ ತಿಳುವಳಿಕೆಯು ಅಳಿಯತೊಡಗಿದೆ. ಅವರಿಗೆ ಕುಡಿಯಲಿಕ್ಕೂ ಬಳಸಲಿಕ್ಕೂ ನೀರು ವಿಪುಲವಾಗಿ ಸಿಗತೊಡಗಿದೆ. ಹರಿಜನರಲ್ಲಿ ಶಿಕ್ಷಣ ಪ್ರಸಾರವು ಸಾಕಷ್ಟು ಒತ್ತರದಿಂದ ಸಾಗತೊಡಗಿದೆ. ಆದ ಕಾರಣದಿಂದ ಅವರು ಸಂಸ್ಕಾರವಂತರಾಗಿ ಕಾಣಿಸತೊಡಗಿದ್ದಾರೆ. ಹರಿಜನ ಹೆಣ್ಣುಮಕ್ಕಳು ಗಂಡುಮಕ್ಕಳು ಶಾಲೆ ಕಲಿತು ಸಣ್ಣಪುಟ್ಟ ನೌಕರಿಗಳನ್ನು ಕೈಕೊಳ್ಳಹತ್ತಿದ್ದಾರೆ. ಅದನ್ನು ಕಂಡು ಊರೊಳಗಿನವರು ದೂರ ಸರಿಯುವುದು ಕಡಿಮೆಯಾಗಿದೆ. ಹರಿಜನ ದಿನಾಚರಣೆಗಳಲ್ಲಿಯೂ, ಗ್ರಾಮೋದ್ಧಾರ ಸಪ್ತಾಹಗಳಲ್ಲಿಯೂ ಹರಿಜನ ಕೇರಿಯಲ್ಲಿ ಶಿಕ್ಷಣ ಸ್ವಚ್ಛತೆಕಾರ್ಯಗಳು ಅನಿವಾರ್ಯವಾಗಿವೆ.

ಶಿಕ್ಷಣ ಪ್ರಸಾರದಿಂದ ಹರಿಜನರಲ್ಲಿ ಡಾ. ಅಂಬೇಡಕರರಂಥ ಮಹಾ ಮೇಧಾವಿಗಳು ಕಾಣಿಸಿಕೊಳ್ಳುತ್ತಿದ್ದಾರೆ. ಅದರಿಂದ ಅವರಲ್ಲಿ ಆತ್ಮವಿಶ್ವಾಸವು ಬೆಳೆಯತೊಡಗಿದೆ. ತಮ್ಮಲ್ಲಿರುವ ಕುಂದುಕೊರತೆಗಳನ್ನು ಕಳಕೊಳ್ಳುವುದು ಶೀಘ್ರವಾದಷ್ಟು ತಮ್ಮ ಕಲ್ಯಾಣವಿದೆಯೆಂದು ಹರಿಜನರು ಬಗೆದಿದ್ದಾರೆ. ಸತ್ತ ದನ ಸುಲಿದು ತಿನ್ನುವುದು, ಹೆಣ್ಣುಮಕ್ಕಳನ್ನು ಸೂಳೆತನಕ್ಕೆ ಬಿಡುವುದು ಮೊದಲಾದ ಕೆಲಸಗಳ ಸಲುವಾಗಿ ಅವರು ನಾಚಿಕೆ ಪಟ್ಟುಕೊಳ್ಳುತ್ತಿದ್ದಾರೆ. ಅವರಲ್ಲಿ ಸ್ವಾಭಿಮಾನವು ಎಚ್ಚರುಗೊಂಡಿದೆ.

ಊರು ಇದ್ದಲ್ಲಿ ಹೊಲಗೇರಿ ಇರುತ್ತದೆಂದು ಹೇಳುವ ವಾಡಿಕೆಯಿದ್ದಂತೆ, ಹೊಲಗೇರಿಯು ಇದ್ದಲ್ಲಿ ಊರು ಇರುತ್ತದೆಂದು ಹೇಳುವುದು ಇನ್ನು ವಾಡಿಕೆಯಾಗಬೇಕಾಗಿದೆ. ಹಾಗೆಂದರೆ, ಒಳ್ಳೆಯದ ಹತ್ತರ ಕೆಟ್ಟದೂ ಮೊಳೆತಿರುತ್ತದೆ. ಕಸದ ಕೂಡ ಬೆಳೆಯೂ ಅಂಕುರಿಸುತ್ತಿದೆಂದಾಗುವ ಮಾತಿಗಿಂತ ಬೆಳೆಯ ಕೂಡ ಕಸವೂ ಕಾಣಿಸಿಕೊಳ್ಳುತ್ತದೆನ್ನುವ ಮಾತು ಸರಿಯಾದದ್ದಿರುತ್ತದೆ. ಕಸವನ್ನು ಕಿತ್ತುಹಾಕಿ, ಪೈರು ಬೆಳೆದು ಬರಲಿಕ್ಕೆ ಹಾದಿ ಮಾಡಿಕೊಡಬೇಕಾಗುತ್ತದೆ. ಅದು ತೋಟಿಗನಲ್ಲಿರಬೇಕಾದ ಜಾಣತನ. ಅಂಥ ಜಾಣತನದ ಕೆಲಸಗಳು ಬೇರೆಬೇರೆ ಕಾಲಕ್ಕೆ ಬೇರೆಬೇರೆ ಮಹಾಪುರುಷರಿಂದ ಜರಗುತ್ತ ಬಂದಿದ್ದರಿಂದ ಅಸ್ಪೃಶ್ಯತೆಯು ಹರಿಜನಸೇವೆಗಾಗಿ ಮಾರ್ಪಟ್ಟುನಿಂತಿದೆ. ಹರಿಜನರು ಹರಿಜನೋದ್ಧಾರವೆಂದು ಕೊಳ್ಳಲಿ. ಇತರರು ಅದಕ್ಕೆ ಹರಿಜನಸೇವೆಯೆಂದೇ ತಿಳುಕೊಳ್ಳುವುದರಲ್ಲಿ ಸಾರ್ಥಕತೆಯಿದೆ. ಇತರರಿಗೆ ಹರಿಜನಸೇವೆಯೊಂದು ಕರ್ತವ್ಯಬುದ್ಧಿಯಾಗಬೇಕು. ಹರಿಜನರಿಗೆ ಇತರರ ಸಹಾಯ ಸೌಕರ್ಯಗಳು ಕೃತಜ್ಞತೆಯ ವಿಷಯವಾಗಬೇಕು. ಅವೆರಡರ ಒಗೆತನವು ಬೆಳೆದು ಬಂದರೆ, ಹರಿಜನೋದ್ಧಾರದ ಕೆಲಸವು ಕಲ್ಯಾಣಕರವಾಗಿಯೂ ತೃಪ್ತಿಕರವಾಗಿಯೂ ಸಾಗಿ ಸಿದ್ಧಿಸುತ್ತದೆ.

ಹರಿಜನೋದ್ಧಾರದ ಕಾರ್ಯವನ್ನು ಸೇವಾಬುದ್ಧಿಯಿಂದ ಮಾಡಲಿಚ್ಛಿಸುವ ಅದೆಷ್ಟೋ ತರುಣರೂ ಪ್ರಬುದ್ಧರೂ ನಮ್ಮ ದೇಶದಲ್ಲಿ ಅಲ್ಲಲ್ಲಿ ಕಾಣಸುತ್ತಾರೆ. ಅವರ ಉತ್ಸಾಹವು ಹೊಗಳತಕ್ಕಂಥದ್ದಾಗಿದೆ. ಅವರ ತ್ಯಾಗವೂ ಸಣ್ಣಪುಟ್ಟದ್ದಾಗಿಲ್ಲ. ಅವರಲ್ಲಿ ಅಂದರೆ, ಹರಿಜನ ಸೇವೆಯಲ್ಲಿ ಸಹಭಾಗಿಯಾಗಲಿರುವ ನಮ್ಮ ನಮ್ಮಲ್ಲಿ ಒಂದಾನೊಂದು ತಿಳುವಳಿಕೆಯು

ದೃಢವಾಗಬೇಕಾಗುತ್ತದೆ. ದೃಢವಾದ ಆ ತಿಳುವಳಿಕೆಯಿಂದ ಮಾಡುವ ಕೆಲಸವು ತಾಳಿಕೆ ಬಾಳಿಕೆಯುಳ್ಳದ್ದಾಗುತ್ತದೆ. ಆದ್ದರಿಂದ ಆ ಒಂದಾನೊಂದು ತಿಳುವಳಿಕೆ ಅದಾವುದು ? ಅವನ್ನಾರು ಹೇಳುತ್ತಾರೆ ?

ಯಾತರದು ಹೊರ್ವೇನು—ನಾತರದು ಸಾಲದೇ ?
ಜಾತಿ ವಿಜಾತಿಯೆನಬೇಡ । ದೇವನೊಲಿಸಿ ।
ದಾತನೇ ಜಾತ ಸರ್ವಜ್ಞ ॥

ದೇವನೊಲಿಯದಿದ್ದರೆ, ನಮಗಾವ ಜಾತಿಯೇ ಇಲ್ಲ. ಅಯ್ಯತನ ಪಡೆದ ಬಳಿಕ ಜಂಗಮತ್ವವೂ, ಮುಂಜಿವೆಯಾದ ಬಳಿಕ ಬ್ರಾಹ್ಮಣತ್ವವೂ ಆರಂಭವಾಗುತ್ತದೆ. ಅಲ್ಲಿಯವರೆಗೆ ಜಂಗಮನೂ ಅಲ್ಲ ಬ್ರಾಹ್ಮಣನೂ ಅಲ್ಲ. ಅದೇ ಪ್ರಕಾರ ದೇವನೊಲಿದ ಬಳಿಕವೇ ಜಾತಿಯುಂಟಾಗುತ್ತದೆ. ಅಲ್ಲಿಯವರೆಗೆ ನಾವು ಯಾವ ಜಾತಿಯವರೂ ಅಲ್ಲ. ದೇವನೊಲಿದ ಜಾತಿಗೆ ಸೇರಬೇಕೆನ್ನುವ ಜನಜಂಗುಳಿಯಲ್ಲಿ ಮೇಲಾರು ಕೆಳಗಾರು ? ಅವರೆಲ್ಲರಿಗೆ, ನಡೆವುದೊಂದೇ ಭೂಮಿ ಅಲ್ಲವೇ-ಕುಡಿವುದೊಂದೇ ನೀರು ಅಲ್ಲವೇ ? ಸುಡುವ ಅಗ್ನಿಯೊಂದೇ ಆಗಲಾರದೇ ? ಹಾಗಾದರೆ, ಕುಲಗೋತ್ರಗಳು ಇನ್ನೆಲ್ಲಿಂದ ಬರುವವು ? ಅವರು ತಿಳಿದುಕೊಳ್ಳುವದೇನಂದರೇ :—

ಸತ್ತದನ ತಿಂಬಾತ ಎತ್ತಣದ ಹೊಲಿಯನು ?
ಒತ್ತಿ ಜೀವವನು ಕೊರೆಕೊರೆದು । ತಿಂಬಾತ ।
ನುತ್ತಮದ ಹೊಲೆಯ ಸರ್ವಜ್ಞ ॥

ಸತ್ತ ಕತ್ತೆಯನ್ನು ಹೊತ್ತೊಯ್ಯುವವನು ಹೊಲೆಯನಲ್ಲವೆಂದೂ, ಉತ್ತಮನೆಂದು ಹೇಳಿಕೊಳ್ಳುತ್ತ ಹೆರರೊಡವೆಯನ್ನು ಹೊತ್ತರೆ ಅವನು ನಿತ್ಯವೂ ಹೊಲೆಯನೆಂದೂ ಮನವರಿಕೆ ಯಾದವರಿಗೆ. ಹರಿಜನ ಸೇವೆಯು ಸಹಜವಾಗಲಾರದೇ-ಸುಲಭವಾಗಲಾರದೇ ? ಸಹಜವೂ ಸುಲಭವೂ ಆದ ಸೇವೆಯು ಹರಿಜನರಿಗೆ ದೊರೆತರೆ, ಅದು ಹರಿಜನೋದ್ಧಾರದ ಕಾರ್ಯವಾಗಲಾರದೇ ?

"ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ ?" "ಹೊಲೆಯಿಲ್ಲ ಅರುವಿಂಗೆ" ಎನ್ನುವ ನುಡಿಗಳನ್ನು ಈ ಹೊತ್ತು ದಲಿತರು ಮನನ ಮಾಡಬೇಕಾಗಿದೆ. ಅಸ್ಪೃಶ್ಯತೆಯನ್ನು ಪ್ರಖರವಾಗಿ ಬಳಸುತ್ತಿರುವ ಕಾಲದಲ್ಲಿ ಸಹ,

ಅದೆಷ್ಟೋ ಜನ ದಲಿತರು ತಮ್ಮ ಆತ್ಮ ವಿಕಾಸದಿಂದ ದೇವಪ್ರೀತರಾಗಿ ಹೋದರಲ್ಲವೆ? ಅವರು ಅಂದಿಗೂ ಇಂದಿಗೂ ಜಗದ್ವಂದ್ಯರಾಗಿಲ್ಲವೇ? ಅರಿವು ಅಂದರೆ ತಿಳುವಳಿಕೆಯು ದಲಿತರಲ್ಲಿ ಬೆಳೆದು ಬಂದಂತೆ, ಅವನು ತೇಜಸ್ವಿಯಾಗುವನಷ್ಟೇ? ಆ ತೇಜವು ಆತನ ಅಂತರಂಗದ ಕೊಳೆಯನ್ನೂ, ಬಹಿರಂಗದ ದುರ್ವಾಸನೆಯನ್ನೂ ಕಳೆದುಹಾಕುವದರಲ್ಲಿ ಸಂಶಯವಿಲ್ಲ. ಆ ದಾರಿಯು ಅಸ್ಪೃಶ್ಯನಿವಾರಣೆಗೆ, ಹರಿಜನೋದ್ಧಾರಕ್ಕೆ ಸರಳವೂ ನೇರವೂ ಆದ ದಾರಿಯಾಗಿದೆ.

ಹೊಲೆಯ ಹೊಲಬಿಗನಾದರೆ —
ಅವನ ಹೊರೆಯಲಿಪ್ಪುದು ಲೇಸುಕಂಡಯ್ಯ.
ಹೊಲಬುಗೆಡದೆ ಲಿಂಗಶರಣೆನ್ನಿರಯ್ಯ.
ಹೊಲಬುಗೆಡಬೇಡ ಶಿವಶರಣೆನ್ನಿರಯ್ಯ.
ನಮ್ಮ ಕೂಡಲಸಂಗನ ಮಹಾಮನೆಯೊಳು
ಮಾದಾರ ಚೆನ್ನಯ್ಯ ಹೊಲಬಿಗನಯ್ಯ.

ಎಂಬ ವಚನವು ಪ್ರತಿಯೊಬ್ಬದಲಿತನ ಕೈಗನ್ನಡಿಯಾಗಬೇಕಾಗಿದೆ. ಅದರಿಂದ ದಲಿತನ ಆತ್ಮೋದ್ಧಾರವಾಗುವದಲ್ಲದೆ, ದೇಶೋದ್ಧಾರವೂ ಕೈಗೂಡಿ ಬರುತ್ತದೆ. ದೇಶದ ಇತಿಹಾಸವೆಲ್ಲವನ್ನೂ ಕಣ್ಣುಮುಂದೆ ತಂದುಕೊಂಡರೆ, ದಲಿತೋದ್ಧಾರದ ಕಾರ್ಯವು ಇದರಿಂದಲೇ ಯಶಸ್ವಿಯಾಯಿತೆಂದು ಕಂಡುಬರುವದು. ಅದೆಂಥ ಪ್ರಭಾವಶಾಲಿಯಾದ ಸ್ಪರ್ಶಮಣಿಯು ಹತ್ತಿರ ಬಂದರೂ, ಕಬ್ಬಿಣವೇ ಹೊನ್ನಾಗಬಲ್ಲದು, ಕಲ್ಲು ಹೊನ್ನಾಗಲಾರದು. ನೂರು ವರುಷ ಪ್ರಾಣಿಗಳನ್ನು ವಧಿಸಿದ ಕಟುಕನ ಕೈಗತ್ತಿಯು ಅರ್ಧಕ್ಷಣದಲ್ಲಿಯೇ ಸ್ಪರ್ಶ ಮಣಿಯಿಂದ ಹೊನ್ನಾಗಿ ಹೋಗುವದು. ಆದ್ದರಿಂದ ದಲಿತರು ಕಲ್ಲಾಗಿ ಕುಳಿತುಕೊಳ್ಳಬಾರದು; ಮಣ್ಣಾಗಿ ಬಿದ್ದುಕೊಳ್ಳಬಾರದು. ಕಲ್ಲು ಮಣ್ಣು ಸೋಸಿ ತೆಗೆದೊಗೆದ ಕಬ್ಬಿಣವಾಗಬೇಕು ಅದು ಅವರ ಕರ್ತವ್ಯವಾಗಿದೆ. ಆ ಕರ್ತವ್ಯವನ್ನು ಅವರು ಪಾಲಿಸಿದರೆ, ಹರಿಜನೋದ್ಧಾರದ ಕಾರ್ಯವು ನಾಳೆಯ ಮಾತಾಗಲಾರದು. ಇಂದೇ ಇದೇ ಗಳಿಗೆಯಲ್ಲಿ ಸಾಧಿಸುವಂಥದಾಗಿದೆ.

# ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯವರ ಪ್ರಕಟಣೆಗಳು.

೧ ಆತ್ಮೋದ್ಧಾರ
೨ [illegible]ವೋದ್ಧಾರ ಪದಗಳು
೩ ಲಾವಣಿ ಪದಗಳ ಸಂಗ್ರಹ
೪ ಪೌರನೀತಿಯ “ ಅ ಆ ”
೫ ಹಿರಿಮೆಯ ಮಂತ್ರ ಅರ್ಥಾತ್ ಸ್ವಚ್ಛತೆ
೬ ಶಿಶುಸಂಗೋಪನ ಹಾಗೂ ಪ್ರಥಮ ಚಿಕಿತ್ಸೆ
೭ ಅಂದ ಚಂದ
೮ ಬಸವಣ್ಣನವರು
ಅಕ್ಕ ಮಹಾದೇವಿ
೧೦ ಬ್ಯಾಂಕುಗಳ ಉಪಯೋಗ
೧೧ ಮಾತನಾಡುವ ದೇವರು
೧೨ ಮಾದರಿಯ ಮಲ್ಲಣ್ಣ
೧೩ ಮರಳಿ ಹಳ್ಳಿಗೆ
೧೪ ಅಕ್ಕ ತಂಗಿಯರಿಗೆ
೧೫ ಹರಿಜನೋದ್ಧಾರ
೧೬ ಯುಗ ಪುರುಷ ಗಾಂಧಿಜಿ
೧೭ ಬಾಳಿನ ಬೆಳಕು
೧೮ ವಯಸ್ಕರ ಪದ್ಯಾವಲಿ
೧೯ ಭಗವಾನ ಮಹಾವೀರ
೨೦ ಕರ್ನಾಟಕದ ಕಥೆಗಳು
೨೧ ಸತ್ಯನಿಧಿ ಹರಿಶ್ಚಂದ್ರ
೨೨ ಜನಪ್ರಿಯ ರಾಮಾಯಣ
೨೩ ಮಹಮ್ಮದ ಪೈಗಂಬರ
೨೪ ಕಲ್ಪ ವೃಕ್ಷ
೨೫ ಕಲಿಯೋದ್ಯಾಕೆ ?

